


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 846 (1180)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು: ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ವಿಷಯ : ಬೀದರ್ ಜಿಲ್ಲೆಯ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿ 2018-19 ರಿಂದ 2020-21ನೇ ಸಾಲಿನ ಅನುದಾನ ಕುರಿತು

(ಅ) 2018-19 ರಿಂದ 2020-21ನೇ ಸಾಲಿನವರೆಗೆ ಬೀದರ್ ಜಿಲ್ಲೆಯ ಅಲ್ಪಸಂಖ್ಯಾತರ ಇಲಾಖೆಗೆ ಬಂದಿರುವ ಒಟ್ಟು ಅನುದಾನ ಎಷ್ಟು; ಖರ್ಚಾದ ಅನುದಾನ ಎಷ್ಟು; ಉಳಿದ ಅನುದಾನವೆಷ್ಟು; ಉಳಿದ ಅನುದಾನದ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರವಾದ ಮಾಹಿತಿ ಒದಗಿಸುವುದು)

(ಆ) 2016-17ನೇ ಸಾಲಿನಲ್ಲಿ ಜಿಲ್ಲಾ ಕಛೇರಿಯ ಮಾಹಿತಿ ಕೇಂದ್ರ, ಪರಿಹಾರ ಬೋಧನೆ ಕೇಂದ್ರ ನಿರ್ವಹಣೆಗಳಿಗೆ ಆಗಿರುವ ಖರ್ಚು ಎಷ್ಟು; ಹಾಗೂ ಈ ಕಾಮಗಾರಿಗಳನ್ನು ಯಾವ ಏಜೆನ್ಸಿಗೆ ನೀಡಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಬೀದರ್ ಜಿಲ್ಲೆಗೆ 2017-18 ರಿಂದ 2020-21ನೇ ಸಾಲಿನಲ್ಲಿ ಕ್ರಿಶ್ಚಿಯನ್, ಜೈನ್, ಭೌದ್ದ, ಮತ್ತು ಸಿಖ್ ಸಮುದಾಯದ ಅಭಿವೃದ್ಧಿಗಾಗಿ ಬಂದಿರುವ ಅನುದಾನ ಎಷ್ಟು; ಬಳಕೆ ಆಗದಿರುವ ಅನುದಾನ ಎಷ್ಟು; ಬಳಕೆಯಾಗದಿರುವುದಕ್ಕೆ ಕಾರಣವೇನು; (ವಿವರವಾದ ವರ್ಷವಾರು ಮಾಹಿತಿ ನೀಡುವುದು)

(ಈ) ಬೀದರ್ ಜಿಲ್ಲೆಗೆ 2017-18 ರಿಂದ 2020-21ನೇ ಸಾಲಿನಲ್ಲಿ ಪ್ರಧಾನ ಮಂತ್ರಿ ಜನ ವಿಕಾಸ ಕಾರ್ಯಕ್ರಮ (ಎಂ.ಎಸ್.ಡಿ.ಪಿ)ಕ್ಕೆ ಬಂದಿರುವ ಅನುದಾನ ಎಷ್ಟು; ಬಳಕೆ ಆಗಿರುವ ಮತ್ತು ಬಳಕೆ ಯಾಗದಿರುವ ಅನುದಾನ ಎಷ್ಟು? (ವಿವರವಾದ ಮಾಹಿತಿ ನೀಡುವುದು)